ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಬುಧವಾರ, ದಿನಾಂಕ : 03 ನೇ ಫೆಬ್ರವರಿ, 2021

ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕಿನ ಚಕ್ರನದಿ ದಂಡೆಯ ವ್ಯಾಪ್ತಿಯ ಮಾಹಿತಿ ಕುರಿತು

ಶ್ರೀಕೆ.ಹರೀಶ್ ಕುಮಾರ್(ವಿಧಾನಸಭೆಯಿಂದ ಚುನಾಯಿತರಾದವರು):-

252 (335) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಉಡುಪಿ ಜಿಲ್ಲಾ ವ್ಯಾಪ್ತಿಯ ಕುಂದಾಪುರ ತಾಲ್ಲೂಕಿನ ಹರಿಯುವ ಚಕ್ರನದಿ ದಂಡೆ ವ್ಯಾಪ್ತಿಯ (Buffer Zone) ಎಷ್ಟು ಮೀಟರ್‌ವರೆಗೆ ಸರ್ಕಾರದ ಅಧೀನಕ್ಕೆ ಒಳಪಟ್ಟಿರುತ್ತದೆ ; (ವಿವರ ನೀಡುವುದು)

(ಆ) Coastal Regulation Act ಮತ್ತು The Rivers and Canals Act 1863 ದಲ್ಲಿನ ಉಲ್ಲೇಖದಂತೆ ತಿದ್ದುಪಡಿ ಒಳಗೊಂಡಂತೆ ವಿಸ್ತøತ ಮಾಹಿತಿ ಒದಗಿಸುವುದು ;

(ಇ) ಖಾಸಗಿ ವ್ಯಕ್ತಿಗಳ ನದಿದಂಡೆ ವ್ಯಾಪ್ತಿಯನ್ನು ಆಕ್ರಮಿಸಿಕೊಂಡಿದ್ದಲ್ಲಿ ಯಾವ ಸಕ್ಷಮ ಪ್ರಾಧಿಕಾರವು ಆಕ್ರಮಿತ ಪ್ರದೇಶವನ್ನು ತೆರವುಗೊಳಿಸುವ ಅಧಿಕಾರ ಹೊಂದಿದೆ; (ವಿವರ ನೀಡುವುದು)

(ಈ) ಸದರಿ ನದಿ ದಂಡೆ ವ್ಯಾಪ್ತಿಯಲ್ಲಿ ಒತ್ತುವರಿ ಮಾಡಿ ನಕಲಿ ಮಾಹಿತಿ ನೀಡಿ ಅಕ್ರಮ-ಸಕ್ರಮದಡಿ ಮಂಜೂರಾತಿ ಮಾಡಿಕೊಂಡಿದ್ದಲ್ಲಿ ಕಾನೂನಿನ ಯಾವ ನಿಯಮಾವಳಿಯಡಿಯಲ್ಲಿ ತೆರವುಗೊಳಿಸಲು ಕ್ರಮ ಕೈಗೊಳ್ಳುವುದು ? (ಸಂಪೂರ್ಣ ವಿವರದೊಂದಿಗೆ ಮಾಹಿತಿ ಒದಗಿಸುವುದು)